# 14

# ವೆಂಕಟನ ಸಂಕಟ

(ಏಕಾಂಕ ಪ್ರಹಸನ)

# ಡಾಕ್ಟರರ "ವಿಝಿಟ್"

(ವಿನೋದ ಕಥೆ)

[ದ್ವಿತೀಯ ಮುದ್ರಣ]

| ಲೇಖನ | ಲೇಖಕರು |
|---|---|
| ವೆಂಕಟನ ಸಂಕಟ | —ಡಾ| ಎಸ್. ಪಿ. ಭಟ್. |
| ಡಾಕ್ಟರರ ವಿಝಿಟ್ | ಡಿ. ಎಮ್. ಎನ್. ಕಾಮತ್. |

1960.




ಒಂದಾಣೆ ಮಾಲೆ

## ಎರಡು ಏಕಾಂಕ ನಾಟಕಗಳು.

# "ನಾವು ಸಾಹುಕಾರಕುಲದವರು"

(ಏಕಾಂಕ ಪ್ರಹಸನ—ದ್ವಿತೀಯ ಮುದ್ರಣ)

ರಚಯಿತ: **ಕುಡ್ಪಿ ವಾಸುದೇವ ಶೆಣೈ.**

ಬೆಲೆ: ಆಣೆ 4. ಟಪ್ಪಾಲು ಖರ್ಚು: 8 ನಯೆ ಪೈಸೆ.



# "ಮಹಾಶ್ವೇತಾ"

(ಪತ್ತೇದಾರಿ ಕಥಾವಸ್ತುವನ್ನೊಳಗೊಂಡ ನಾಟಕ)

ರಚಯಿತ: **ವೈದ್ಯಗುರು ಎಂ. ಆರ್. ಭಟ್.**

ಬೆಲೆ: ಆಣೆ 4. ಟಪ್ಪಾಲು ಖರ್ಚು: 8 ನಯೆ ಪೈಸೆ.

ಪರಿವೂರಿನವರು ಮೊಬಲಗನ್ನು ಅಂಚೆಚೀಟು ಮೂಲಕ ಕಳಿಸಬೇಕು.
ವಿ. ಪಿ. ಕಳಿಸಲಾಗುವುದಿಲ್ಲ.

**ಪ್ರಭಾತ ಆಫೀಸು, ರಥಬೀದಿ, ಮಂಗಳೂರು.**

# ವೆಂಕಟನ ಸಂಕಟ

(ಏಕಾಂಕ ಪ್ರಹಸನ)

ಲೇಖಕ:—ಡಾ। ಎಸ್. ಪಿ. ಭಟ್.

---

ಪಾತ್ರಗಳು:

ವೆಂಕಟ: ಬಿ. ಎ. ವಿದ್ಯಾರ್ಥಿ; ಕರ್ಣಾಟಕ ವಿದ್ಯಾರ್ಥಿಭವನದ ನಿವಾಸಿ.

ಶೀನು: ವಾಸು: ನಾಣು: ಮಾಧು: ರಾಮು: ಬಿ. ಎ. ವಿದ್ಯಾರ್ಥಿಗಳು; ವೆಂಕಟನ ಸ್ನೇಹಿತರು; ಕರ್ಣಾಟಕ ವಿದ್ಯಾರ್ಥಿ ಭವನದ ನಿವಾಸಿಗಳು.

ರಾಮಚಂದ್ರರಾಯರು: ಹೊರವೂರಿನ ಒಬ್ಬ ಕನ್ಯಾಪಿತ.

ಸ್ಥಳ: ಕರ್ಣಾಟಕ ವಿದ್ಯಾರ್ಥಿಭವನ: ವೆಂಕಟನ ಕೋಣೆ.

ಸಮಯ: ಒಂದು ಆದಿತ್ಯವಾರ: ಸಾಯಂಕಾಲ ೪।। ಘಂಟೆ.

## ದೃಶ್ಯ ೧.

[ವೆಂಕಟ, ರಾಮು, ಮಂಚದ ಮೇಲೆ ಕುಳಿತಿರುವರು. ನಾಣು ಕುರ್ಚಿಯ ಮೇಲೆ, ವಾಸು ಕಿಟಿಕಿಯ ಅಂಚಿನಲ್ಲಿ, ಮಾಧು ಮೇಜಿನ ಮೇಲೆ, ಶೀನು ಟ್ರಂಕಿನ ಮೇಲೆ ಕುಳಿತಿರುವರು. ಎಲ್ಲರ ಕೈಯಲ್ಲಿಯೂ ಸಿಗರೇಟುಗಳು ಮೆರೆಯುವುವು. ನೆಲದ ಮೇಲೆ ಒಂದು ಮೂಲೆಯಲ್ಲಿ ಕೆಲವು ಬರಿದಾದ ಕಾಫಿಯ ಟಂಬ್ಲರುಗಳೂ, ತಿಂಡಿಯ ಪ್ಲೇಟುಗಳೂ ಕಾಣುವುವು.]

ವೆಂಕಟ:—ಹೊಟ್ಟೆ ಗಟ್ಟಿಯಾಯಿತಲ್ಲ, ಇನ್ನು ನಡೆಯಿರಿ ಹೊರಗೆ. ನನಗೆ ಓದಲಿಕ್ಕಿದೆ.

ವಾಸು:—ಹಃ, ನಿನಗೊಬ್ಬನಿಗೇ ಪರೀಕ್ಷೆಯಿದೆ. ನಾವೆಲ್ಲರೂ ಉಂಡಾಡಿಗಳು, ಅಲ್ಲವೇ?

ದಾಮು:—ಚಿಃ, ವಾಸು! ಇಷ್ಟು ಬೇಗನೇ ಮರೆತೆಯಾ? ಅವನಿಗೆ ಓದಲಿಕ್ಕಿದೆ ಎಂಬುದು ರಾಮಚಂದ್ರರಾಯರ ಕಾಗದ, ಕಾಣೋ! ಸರಿಯಾಗಿ ಎಷ್ಟು ಘಂಟೆಗೆ ಬರುತ್ತಾರೆಂಬುದನ್ನು ಇನ್ನೊಮ್ಮೆ ತಿಳಿದುಕೊಳ್ಳಲಿಕ್ಕೆ.

ನಾಣು:—ಇಲ್ಲವೇ, ಆ ಪುಣ್ಯಾತಿಗಿತ್ತಿ ರಂಭೆಯೋ, ಊರ್ವಶಿಯೋ, ತಾನೂ ಒಂದು ಕಾಗದವನ್ನು ತನ್ನ ಭಾವೀ ಪತಿಗೆ ಆಗಲೇ ಬರೆದು ತಂದೆಯ ಲಕೋಟೆಯಲ್ಲೇ ಸೇರಿಸಿರುವಳೋ ಏನು ಕರ್ಮವೋ!

ಎಲ್ಲರೂ:—ಹ ಹ ಹ್ಹ ಹ ಹ್ಹ ಹ!

ವೆಂಕಟ:—ಆಗಲಿ, ಆಗಲಿ, ನಿಮ್ಮ ತಮಾಷೆ! ಪುಣ್ಯಕ್ಕೆ 'ಶೂರ್ಪನಖಿ' ಇಲ್ಲವೇ 'ಹಿಡಿಂಬೆ' ಎನ್ನದುದಕ್ಕೆ ನಿಮ್ಮೆಲ್ಲರಿಗೂ ಋಣಿಯಾಗಿರಬೇಕಾಗಿದೆ.

ಮಾಧು:—ಋಣಿಯೋ ಗಿಣಿಯೋ ಇನ್ನು ರಾಣಿಯು ಬಂದ ಮೇಲೆಯೇ ತಿಳಿಯುವುದು.

ಶೀನು:—ಎಂದರೆ ರಾಣಿಯ ಕೈಯ್ಯಲ್ಲಿ ಗಿಣಿಯಾಗಿ ಕುಣಿಯುವನೆಂದೋ ನಮ್ಮ ವೆಂಕಟ?

ಮಾಧು:—ಹಾಗೆಂದು ನೀವೇ ಎನ್ನಿ. ನಾನೇಕೆ ಎನ್ನಲಿ?

ದಾಮು:—ಅಂತೂ, ಅವಳು ಕಾಗದ ಬರೆದಿರುವಳೆಂಬುದು ನಿಜವೇ?

ವೆಂಕಟ:—ಕಾಗದ? ಬರೆಯುವುದು? ಅಂತಹ ಅದೃಷ್ಟವು ಆ ಹಳ್ಳಿಗಾಡಿನ ಹುಡುಗಿಯ ಹಣೆಯಲ್ಲಿ ಬರೆದಿರುವುದಾದರೆ, ನಮ್ಮ ಭಾಗ್ಯಕ್ಕೆ ಎಣೆಯೆಲ್ಲಿದೆ?

ವಾಸು: ವೆಂಕಟ! ಹಳ್ಳಿಯ ಹೂವೆಂದು ಅಷ್ಟು ಧಿಕ್ಕಾರವೇ? ಪಟ್ಟಣದ ಪುಷ್ಪವು ನಡುಹಗಲ ಮುಂಚಿನ ಎಳೆಬಿಸಿಲಿಗೇ ಬಾಡುತ್ತಿರುವಾಗ ಸಂಜೆಯಾದರೂ ಕೊಡೆಯುತ್ತ ನಲಿಯುವ ಹಳ್ಳಿಯ ಹೂವಿನ ಗಟ್ಟಿಮುಟ್ಟನ್ನು ನೀನೇನು ಬಲ್ಲೆ?

ದಾಮು:—ಎಂತಹ ಮಂಕನೋ ನೀನು, ವಾಸು! ವೆಂಕಟನಿಗೆ ಬೇಕಾದುದು ಗಟ್ಟಿಮುಟ್ಟಲ್ಲ, ಥಳಕು ಕಾಣೋ!-ಘಮಘಮ. ಅದೆಲ್ಲಿದೆಯೋ, ಹಳ್ಳಿಯ ಹೂವಿನಲ್ಲಿ?

ಶೀನು:—ಸರಿ, ಸರಿ! ಬೆಡಗು-ಬಿನ್ನಾಣ, ಒನಪು-ಒಯ್ಯಾರ, ಥಳಕು-ಬೆಳಕು ಇಲ್ಲದ ಹೂವಿಗೆ ಬರೇ ಬಾಳಿಕೆಯಿದ್ದು ಫಲವೇನು?

ಸಂತೋಷಪಡಿಸಲಾರದೇ ಇರುವಂತಹ ಹೂವನ್ನು ಹೂವೆಂದು ಕರೆಯುವುದೂ ಅಪರಾಧವಾದೀತು. ಅಲ್ಲವೇ, ವೆಂಕಟ?

**ಮಾಧು:**—ಶಹಭಾಸ್, ಶಹಭಾಸ್! ನವನಾಗರಿಕತೆಗೆ ಜಯವಾಗಲಿ! ಹಳ್ಳಿಯ ಹೂಗಳು ಹಳ್ಳಿಯಲ್ಲೇ ಉಳಿಯಲಿ, ಪಟ್ಟಣದವರೆಲ್ಲರೂ ಪಟ್ಟಣದ ಪುಷ್ಪಗಳನ್ನೇ ಮುಡಿದುಕೊಳ್ಳಲಿ!

**ವಾಸು:**—ಅದೇನು ಕೇಳಿಬರುತ್ತಿದೆ?–ಜಟಕಾ ಗಾಡಿಯ ಶಬ್ದವೇ?

**ಶೀನು:**—ಹೌದು, ಹೌದು. ನಮ್ಮ ಗೇಟಿನ ಮುಂದೆಯೇ ನಿಂತಂತೆ ತೋರುತ್ತದೆ.

**ನಾಣಿ:**—ಒಳ್ಳೆಯ ವ್ಯಾಪಾರ, ವೆಂಕಟ! ನಮಗೆ ತಿಳಿಸಲೇ ಬೇಡವೇ ರಾಮಚಂದ್ರರಾಯರು ಇಷ್ಟು ಬೇಗನೇ ಬರುವರೆಂದು?

**ವೆಂಕಟ:**—ತಪ್ಪಾಯಿತು, ಕ್ಷಮಿಸಿ; ನಿಮಗೆ ಡಂಗುರ ಬಡೆದು ತಿಳಿಸಬೇಕಿತ್ತು.

**ದಾಮು:**—ಬೇಡವೋ, ವೆಂಕಟ! ಇನ್ನು ನಾವೇ ಡಂಗುರ ಬಡೆಯುವೆವು. ಸ್ನೇಹತರಿಂದಾದಮೇಲೆ ಅಷ್ಟಾದರೂ ನೆರವಾಗದಿರಬಹುದೇ?

[ಕಿಟಕಿಯ ಹೊರಗಿಂದ ರಾಮಚಂದ್ರರಾಯರು ಇಣಿಕಿ ನೋಡುವರು.]

**ರಾಮಚಂದ್ರರಾಯರು:**—ವೆಂಕಟರಾಯರ ಕೋಣೆಯು ಇದೇಯೋ?

**ನಾಣಿ:**—ಹೌದು, ಸ್ವಾಮಿ! ಈಚೆಗೆ ಬನ್ನಿ.

[ರಾಮಚಂದ್ರರಾಯರು ಬಾಗಿಲ ಬಳಿಗೆ ಬರುವರು.]

**ವೆಂಕಟ:**—ಅಂಽಽಽಽ ಹಾಂಽಽಽಽ............

**ಎಲ್ಲರೂ:**—ಅಂ ಅಂ ಅಂ, ಹಿಡಿಯಿರಿ, ಹಿಡಿಯಿರಿ!

[ದಾಮು, ಶೀನು ವೆಂಕಟನನ್ನು ಹಿಡಿದುಕೊಳ್ಳುವರು.]

## ದೃಶ್ಯ ೨.

[ರಾಮಚಂದ್ರರಾಯರು ಬಾಗಿಲ ಹೊರಗೇ ತಟಸ್ಥರಾಗಿ ನಿಂತುನೋಡುವರು. ಇತರರು ವೆಂಕಟನನ್ನು ಮೇಲೆತ್ತಿ ಮಂಚದ ಮೇಲೆ ಬಿಡಿಸಿದ ಹಾಸಿಗೆಯಲ್ಲಿ ಮಲಗಿಸುವರು. ನಾಣಿ ಒಂದು ರಟ್ಟಿನಿಂದ ವೆಂಕಟನಿಗೆ ಗಾಳಿ ಬೀಸುವನು. ದಾಮು ಅವನ ಮುಖದ ಮೇಲೆ ನೀರು ಚಿಮುಕಿಸುವನು. ವಾಸು ಮೇಜಿನ ಮೇಲಿಂಡ ಒಂದು ಮೂಸುಪ್ಪಿನ ಸೀಸೆಯನ್ನು ತೆಗೆದು ವೆಂಕಟನ

ಮೂಗಿನ ಮುಂದೆ ಹಿಡಿಯುವನು. ಮಾಧು ವೆಂಕಟನ ಕೈಯನ್ನು ಎತ್ತಿಕೊಂಡು ನಾಡಿಯ ಬಡಿತವನ್ನು ಪರೀಕ್ಷಿಸುತ್ತಿರುವನು.]

**ಮಾಧು:**—ಇನ್ನು ಗಾಬರಿ ಬೇಡ, ರೆಪ್ಪೆಗಳು ಅಲುಗುತ್ತಿವೆ!

**ನಾಣು:**—ನೋಡಿ, ಮೂಗಿಗೆ ಖಾರವು ಹೆಚ್ಚಾದಂತಿದೆ; ಇಗೋ ಮುಖವನ್ನೂ ಆಚೆಗೆ ತಿರುಗಿಸಿದನು!

**ದಾಮು:**—ಇಗೋ, ಕಣ್ಣು ಬಿಡಲಿಕ್ಕೆ ಯತ್ನಿಸುತ್ತಿರುವನು! ಆ ನೀರನ್ನು ಸ್ವಲ್ಪ ಒರಸಿ ತೆಗೆ. ಹಾಂ, ಸರಿ. ಈಗ ಸರಿಯಾಗಿ ಬಿಡಲಿಕ್ಕೆ ಆಗುತ್ತದೆ!

**ಶೀನು:**—ಬಹಳ ದಿನಗಳಿಂದ ರಾತ್ರಿ ನಿದ್ದೆ ಕೆಡುತ್ತಿರುವಿಯಾ? ಕಣ್ಣು ಕತ್ತಲು ಬಂತೇ?

**ವೆಂಕಟ:**—ಊಂ ೯ ೯ ೯–ಊಂ ೯ ೯ ೯........ನಾನೆಲ್ಲಿದ್ದೇನೆ? ಏನಾಯಿತು?

[ಎದ್ದು ಕೂತುಕೊಳ್ಳುವನು.]

**ಮಾಧು:**—ಏನೂ ಇಲ್ಲ, ಕಾಣೋ; ಹುಶ್ಯಾರಿರುವಿ. ಏಳಬೇಡ; ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳು. [ಅವನನ್ನು ಒತ್ತಾಯದಿಂದ ಮಲಗಿಸ ತೊಡಗುವನು.]

[ನಾಣು ಮೂಸುಪ್ಪಿನ ಸೀಸೆಯನ್ನು ಮೇಜಿನ ಮೇಲಿಟ್ಟು, ಅಲ್ಲಿನ ಇನ್ನೊಂದು ಸೀಸೆಯೊಳಗಿಂದ ಒಂದು ಮಾತ್ರೆಯನ್ನು ತಂದು ವೆಂಕಟನ ಬಾಯಲ್ಲಿ ಹಾಕುವನು.]

**ಮಾಧು:**—ಇನ್ನು ಸರಿಯಾಗಿ ಮಲಗು. ಚೆನ್ನಾಗಿ ವಿಶ್ರಾಂತಿ ಪಡೆಯದೆ ಏಳಬೇಡ.

[ವೆಂಕಟನು ಮಲಗಿ ನಿದ್ದೆಹೋಗುವನು. ಎಲ್ಲರೂ ಸರಿಯಾಗಿ ಉಸಿರಾಡ ತೊಡಗುವರು. ರಾಮಚಂದ್ರರಾಯರು ಮೆಲ್ಲಗೆ ಕೋಣೆಯೊಳಗೆ ಬರುವರು.]

**ವಾಸು:**—ಸ್ವಾಮೀ! ಬಹಳ ಸಮಯ ತಮ್ಮನ್ನು ದಣಿಸಿದೆವು. ಆದರೆ ಮಾಡುವುದೇನನ್ನು? ಉಪಾಯವಿರಲಿಲ್ಲ!

**ರಾಮಚಂದ್ರರಾಯರು:**—ಹೌದಪ್ಪ, ಅದರಲ್ಲೇನು. ನನಗೂ ಕಣ್ಣಿಲ್ಲವೇ? ಕಣ್ಣಿನಲ್ಲಿ ನೆತ್ತರಿಲ್ಲವೇ?

**ದಾಮು:**—ಆದರೂ, ಮೊದಲೇ ಪರಸ್ಥಳದಿಂದ ದಣಿದು ಬಂದವರು. ಅದಕ್ಕಾಗಿಯೇ ಹಾಗೆಂದೆವು.

ರಾಯರು:—ಚಿಂತೆಯಿಲ್ಲ. ಆದರೆ ನನಗೆ ವೆಂಕಟರಾಯರನ್ನು ಕಾಣಬೇಕಿತ್ತು. ಅದಕ್ಕಾಗಿಯೇ ಇಷ್ಟು ದೂರ ದಣಿದು ಬಂದುದು!

ನಾಣು:—ನೀವು ಅವರನ್ನು ಆಗಿನಿಂದಲೇ ನೋಡುತ್ತಿರುವಿರಲ್ಲ! ಅವರ ಶುಶ್ರೂಷೆಯನ್ನೇ ನಾವು ಇಷ್ಟು ಸಮಯ ಮಾಡುತ್ತಿದ್ದೆವು.

ರಾಯರು:—ಏನು! ಇವರೇ ವೆಂಕಟರಾಯರೇ?

ಶೀನು:—ಅಷ್ಟೇಕೆ ಗಾಬರಿಯಾದಿರಿ, ಸ್ವಾಮೀ? ಅವರು ಪೂರ್ತಿ ಸೌಖ್ಯದಲ್ಲೇ ಇದ್ದಾರೆ.

ರಾಯರು:—ಅದೇನಾಗಿತ್ತು ಅವರಿಗೆ? ಹಾಗೇನು ಫಕ್ಕನೆ ಬಿದ್ದುಬಿಟ್ಟರು?

ವಾಸು:—ಅದೇನೂ ದೊಡ್ಡ ರೋಗವಲ್ಲ. ಏನೋ ಒಂದೊಂದು ಸಲ ಫಕ್ಕನ ಬಿದ್ದುಬಿಡುವರು, ಎಲ್ಲಿ, ಯಾವಾಗ ಎಂದಿಲ್ಲ. ಬಹುಶಃ ನಿದ್ದೆಗೆಟ್ಟು ಓದುವುದರಿಂದಲೋ ಏನೋ. ಆದರೆ ಕೂಡಲೇ ಸ್ಮೃತಿಗೆ ಬರುವರು. ಸಾಲದುದಕ್ಕೆ ತಕ್ಕ ಔಷಧಿಗಳನ್ನೂ ಬಳಿಯಲ್ಲೇ ಇಟ್ಟುಕೊಳ್ಳುತ್ತಾರೆ.

ರಾಯರು:—ನಿಮಗೆ ನಾನು ಬಹಳ ಕೃತಜ್ಞನಾಗಿರುವೆನು. ಹೋಗಿಬರುತ್ತೇನೆ.

ರಾಮು:—ಎಲ! ನಿಮಗೆ ವೆಂಕಟರಾಯರ ಬಳಿಯಲ್ಲಿ ಕೆಲಸವಿದ್ದು ಇಷ್ಟು ದೂರ ಬಂದೆನೆಂದಿದ್ದಿರಲ್ಲ?

ರಾಯರು:—ಕೆಲಸವಿದ್ದುದೇನೋ ನಿಜ. ಆದರೆ ಇದನ್ನು ನೋಡಿದ ಮೇಲೆ ಕೆಲಸವೆಲ್ಲ ಮುಗಿಯಿತಪ್ಪ!

ಎಲ್ಲರೂ:—ಎಂದರೆ?

ರಾಯರು:—ಅದೆಲ್ಲಾ ಸ್ವಲ್ಪ ನಾಜೂಕಿನ ವಿಚಾರ. ಆದರೂ ನೀವು ನನಗೆ ಮಾಡಿದ ಉಪಕಾರಕ್ಕಾಗಿ ಅದನ್ನು ನಿಮ್ಮೊಡನೆ ಹೇಳಲು ನನಗೆ ಆಕ್ಷೇಪವೇನೂ ಇಲ್ಲ.

ಎಲ್ಲರೂ:—ಹಾಗಾದರೆ ಹೇಳಿಯೇ ಬಿಡಿ, ಸ್ವಾಮೀ.

ರಾಯರು:—ನಮ್ಮ ಹುಡುಗಿಯನ್ನು ನಿಮ್ಮ ವೆಂಕಟರಾಯರಿಗೆ ಕೊಡಬೇಕೆಂದಿದ್ದೆವು. ಅವರನ್ನೊಮ್ಮೆ ನೋಡಿಕೊಂಡು ಹೋಗುವಾ ಎಂದೇ ಬಂದಿದ್ದೆ. ಇನ್ನು ಆ ವಿಚಾರ ಬಿಡಬೇಕಾಯಿತು.

ದಾಮು:—ಅಯ್ಯೋ! ಹಾಗಾದರೆ, ನಮ್ಮಿಂದಲೇ ನಮ್ಮ ವೆಂಕಟನ ಸಂಬಂಧ ತಪ್ಪುವಂತಾಯಿತೇ?

ರಾಯರು:—ಏನಿದ್ದರೂ, ನಮ್ಮ ಹುಡುಗಿಯು ಬಚಾವಾದಳಲ್ಲ! ಅದಕ್ಕಾಗಿ ನಿಮಗೆ ನನ್ನ ನಮಸ್ಕಾರಗಳು; ಹೋಗಿ ಬರುತ್ತೇನಪ್ಪ.

[ಹೋಗುವರು.]

## ದೃಶ್ಯ ೩.

[ಐದು ನಿಮಿಷಗಳ ಮೇಲೆ ವೆಂಕಟನು ಎದ್ದು ಕೂತುಕೊಳ್ಳುವನು.]

ಎಲ್ಲರೂ:—ಹ ಹ್ಹ ಹ್ಹ! ಹ ಹ್ಹ ಹ್ಹ! ಹ ಹ್ಹ ಹ್ಹ!

ನಾಣು:—ಹೇಗೆ ನಮ್ಮ ಉಪಾಯ?

ವೆಂಕಟ:—ಭಲೇ! ನಿಮ್ಮನ್ನೆನ್ನಬೇಕು ನಿಜವಾದ ಸ್ನೇಹಿತರೆಂದು!

ದಾಮು:—ಏನಿದ್ದರೂ ನಮ್ಮ ಉಪಾಯದಿಂದ ನಿನ್ನ ಮೇಲೆ ಬಂದಿದ್ದ ಸಂಕಟವು ದೂರವಾದುದಕ್ಕೆ ನಾವು ಸಂತೋಷಪಡಲೇಬೇಕು.

ಶೀನು:—ಇನ್ನು ನಿನ್ನ ತಂದೆಯವರ ಒತ್ತಾಯಕ್ಕೆ ಎಡೆಯಿದೆಯೇ? ಮುಂದೆ ಪಟ್ಟಣದ ಪುಷ್ಪವೊಂದನ್ನೇ ಆಯ್ದು ಮುಡಿದುಕೊಂಡುಬಿಡು.

ಮಾಧು:—ಆ ಮುದಿಗೂಬೆಯು ನೋಡುತ್ತಿದ್ದ ರೀತಿಯನ್ನು ಕಂಡು ಅವನೆಲ್ಲಿ ನಮ್ಮ ಗುಟ್ಟನ್ನು ತಿಳಿದು ಬಿಡುವನೋ ಎಂದು ಹೆದರಿದ್ದೆ.

ನಾಣು:—ಆತನು ನನ್ನ ಕೈಯೊಳಗಿನ ಮೂಸುಪ್ಪಿನ ಸೀಸೆಯು ಬರಿದಾದುದೆಂದು ಎಲ್ಲಿ ಕಂಡುಹಿಡಿಯುವನೋ ಎಂದು ನನಗೆ ತಳಮಳವುಂಟಾಗಿತ್ತು. ಅಲ್ಲದೆ ನಾನು ವೆಂಕಟನಿಗೆ ಕೊಟ್ಟ ಮಾತ್ರೆಯು ಪೆಪ್ಪರ್‌ಮಿಂಟಾಗಿತ್ತೆಂದು ಸಾಮಾನ್ಯ ಪೇಟೆಯವನಿಗಾದರೆ ನೋಡುವಾಗಲೇ ತಿಳಿಯುತ್ತಿತ್ತು.

ಶೀನು:—ಆದರೆ ವಾಸು ವೆಂಕಟನಿಗೆ ಈ ರೀತಿಯಲ್ಲಿ ಆಗಿಂದಾಗ ಆಗುತ್ತಿರುವುದೆಂದು ಹೇಳಬಾರದಿತ್ತು. ಯಾರಾದರೂ ಅಂತಹುದನ್ನು ಇತರರಿಗೆ ತಿಳಿಸಿ ಗುಟ್ಟುರಟ್ಟಾಗಿ ಮಾಡುವರೇ? ಅಲ್ಲಿ ಸ್ವಾಭಾವಿಕತೆ ತಪ್ಪಿಹೋಯಿತು.

ವಾಸು:—ಅದೆಲ್ಲಾ ಆ ಹಳ್ಳಿಯ ಮುದುಕಯ್ಯನಿಗೆ ಹೇಗೆ ತಿಳಿಯಬೇಕು? ಆತನಿಗೆ, ಪಾಪ, ಹುಡುಗನಿಗೆ ಅಪಸ್ಮಾರ ರೋಗವುಂಟೆಂದು ಪೂರ್ತಿಯಾಗಿ ಮನದಟ್ಟಾಗಿರುವುದು. ಅಂತಹವರಿಗೆ ಮುಖ್ಯಾಂಶವಲ್ಲದೆ ಇತರ ಅಲ್ಪಾಂಶಗಳು ಅನಗತ್ಯ.

[ಕಿಟಕಿಯ ಹೊರಗಿಂದ]

**ರಾಮಚಂದ್ರರಾಯರು:**—ಆದರೆ ನಿಮ್ಮಂತಹ ಉಪಾಯಶಾಲಿಗಳಿಗೆ ಅಲ್ಪಾಂಶಗಳಲ್ಲದೆ ಮುಖ್ಯಾಂಶವೇ ಅನಗತ್ಯವಾಯಿತಲ್ಲ!

[ಎಲ್ಲರೂ ಬಾಗಿಲ ಬಳಿಗೆ ಓಡಿಹೋಗಿ ಹೊರಗೆ ನೋಡುವರು; ಅಲ್ಲಿ ರಾಮಚಂದ್ರರಾಯರು ಕಿಟಕಿಯ ಹತ್ತಿರ ನಿಂತುಕೊಂಡಿರುವರು.]

**ನಾಣು:**—ಇದೇನು, ನೀವು ಇಲ್ಲೇ ನಿಂತಿದ್ದಿರಾ?

**ರಾಯರು:**—ಹೌದು, ಆದರೆ ನಿಮ್ಮ ಮಾತುಗಳನ್ನು ಕೇಳುವ ಉದ್ದಿಶ್ಯವಲ್ಲ. ನನಗೆ, ಸ್ವಲ್ಪ ದೂರ ಹೋಗುವಷ್ಟರಲ್ಲಿ, ಏನಿದ್ದರೂ ವೆಂಕಟರಾಯರೊಡನೆ ಒಮ್ಮೆ ಮಾತಾಡಿಯೇ ಹೋಗುವುದು ಧರ್ಮವೆಂದೆನಿಸಿತು. ಅದಕ್ಕಾಗಿ ತಿರುಗಿ ಇಲ್ಲಿಗೆ ಬಂದೆನು. ಅಷ್ಟರಲ್ಲಿ ನಿಮ್ಮ ನಗಾಟವು ಕೇಳಿ ಬಂದು ನಾನು ತಬ್ಬಿಬ್ಬಾಗಿ ಇಲ್ಲೇ ನಿಂತುಬಿಟ್ಟೆವು. ಆ ವೇಳಿನ ನಿಮ್ಮ ಮಾತುಗಳು ತಾವಾಗಿಯೇ ಕೇಳಿಬಂದುದರಲ್ಲಿ ನನ್ನ ತಪ್ಪೇನಿದೆ?

**ಎಲ್ಲರೂ:**—ತಪ್ಪು ನಮ್ಮದೇ ಸ್ವಾಮಿ!

**ರಾಯರು:**—ಯಾವ ತಪ್ಪಿಗೂ ಪ್ರಾಯಶ್ಚಿತ್ತವುಂಟು. ಈಗ ನಿಮ್ಮ ತಪ್ಪಿನ ಪ್ರಾಯಶ್ಚಿತ್ತವನ್ನೂ ತಿಳಿಸಿಯೇ ಹೋಗುವೆನು. ವೆಂಕಟರಾಯರೇ, ನಿಮ್ಮ ಬುದ್ಧಿವಂತಿಕೆಯೂ, ಯೋಗ್ಯತೆಯೂ ನನಗೆ ಚೆನ್ನಾಗಿ ಖಚಿತವಾಗಿರುವುದು. ಅದಕ್ಕಾಗಿ ನಿಮಗೆ ನನ್ನ ಅಳಿಯನ ಪಟ್ಟವನ್ನು ಕಟ್ಟಬೇಕೆಂದು ನಿಶ್ಚಯಮಾಡಿರುವೆನು. ಆದರೆ ನಿಮಗೆ ನನ್ನ ಹುಡುಗಿಯು ಹಳ್ಳಿಯ ಹೂವೆಂಬ ಅಂಜಿಕೆ ಬೇಡ. ಯಾಕೆಂದರೆ ಅವಳು ಪಟ್ಟಣದ ಪುಷ್ಪವೇ ಆಗಿರುವಳು. ನಾನು ಪಟ್ಟಣದವನೇ ಆಗಿದ್ದು, ಈಚೆಗೆ ಪೆನ್ಶನ್ ಆದ ಮೇಲೆಯೇ ಹಳ್ಳಿಯಲ್ಲಿ, ಹವೆಗಾಗಿ ವಾಸಮಾಡಹೋದುದು. ನನ್ನ ಹುಡುಗಿಯು ಈಗಲೂ ಪಟ್ಟಣದಲ್ಲೇ, ನನ್ನ ಭಾವನಲ್ಲಿ ಇದ್ದುಕೊಂಡು ವಿದ್ಯಾಭ್ಯಾಸಮಾಡುತ್ತಿರುವಳು. ಇನ್ನಾದರೂ ನಿಮಗೆ ಆಕ್ಷೇಪವಿದೆಯೇ?

**ಎಲ್ಲರೂ:**—ಇಲ್ಲ, ಇಲ್ಲ, ನಿಜವಾಗಿಯೂ ಇಲ್ಲ! ಈ ಸಂಬಂಧವಾಗಿ ಮಿಠಾಯಿ ತಿನ್ನಲಂತೂ ನಿಶ್ಚಯವಾಗಿಯೂ ಆಕ್ಷೇಪವೇ ಇಲ್ಲ!

**ರಾಯರು:**—ಹಾಗಾದರೆ ಇಕೊಳ್ಳಿರಿ!

[ಕೈಯೊಳಗಿನ ಮಿಠಾಯಿ ತೊಟ್ಟಿಯನ್ನು ಅವರಿಗೆ ಕೊಡುವನು.]

---

# ಡಾಕ್ಟರರ "ವಿಝಿಟ್"

(ಲೇಖಕ: ಎಮ್. ಎನ್. ಕಾಮತ್)

ವಸಂತಕಾಲವು ಒದಗುತ್ತಲೇ ಕಾಗೆ ಕಾಗೆಯೆ; ಕೋಗಿಲೆ ಕೋಗಿಲೆಯೆ; ಅಂತೆಯೆ ಮನುಷ್ಯಸಮಾಜದಲ್ಲೂ ಇಲ್ಲದೆ ಇಲ್ಲ. ಚೈತ್ರಾಗಮವನ್ನು ತಿಳಿದೊಡನೆಯೆ, ನಮ್ಮ ಗೀಷ್ಮ ಪ್ರಾಮುಖ್ಯವಾದ ದೇಶದಲ್ಲಿ, "ನೇಟಿವರ ಉದ್ಧಾರಕ್ಕಾಗಿ ಜೀವನಾಹುತಿಯನ್ನಾದರೂ ಕೊಡಬಂದ ಉಚ್ಚವೇತನ ಲಾಭವನ್ನುಳ್ಳ ಯುರೋಪಿಯಾನರೂ ನೇಟಿವರನ್ನು ಅಲ್ಲಲ್ಲೆ ಬಿಟ್ಟು, ತಮ್ಮ ನೈಬಿಳುಪು ತ-ತ-ತಳುಕಾಗಿರುವ ಹಾಗೆ, ಡಾರ್ಜಿಲಿಂಗ್, ಸಿಮ್ಲಾ, ಮಹಾಬಲೇಶ್ವರ, ನೀಲಗಿರಿಗಳಿಗೆ ಹೋಗುವ ಯಾತ್ರಾ ಕಷ್ಟವನ್ನು ಸಹಿಸದೆ ಇಲ್ಲ. ಸಿಮ್ಲಾವಿನ ಲಘುಸಂಸ್ಕರಣವೆಂಬಂತಿರುವ ನೀಲಗಿರಿಯು ಇನ್ನಷ್ಟು ಸಂಕ್ಷಿಪ್ತ ಆವೃತ್ತಿಯಾಗಿರುವ ಕುದುರೆಮುಖವು, ಬಹುಮುಖಗಳಿಂದಲೂ ಸ್ತುತಿಮಾಡಿಕೊಳ್ಳದೆ ಇಲ್ಲ. ಹಿಂದೂ ಯಾತ್ರಾರ್ಥಿಗಳಿಗೆ ಗೋಮುಖವಿರುವಂತೆ, ನಮ್ಮಲ್ಲಿನ ಯುರೋಪಿಯಾನರಿಗೆ, ಸಮುದ್ರತಲಕ್ಕಿಂತ ೭೦೦೦ ಅಡಿ ಎತ್ತರದ ಈ ಕುದುರೆಮುಖವೇ ಗೀಷ್ಮಾಶ್ರಯ. ಆಶ್ರಯಕ್ಕಾಗಿ ಅಲ್ಲಿ ಆಶ್ರಮವೂ ಇದೆ. ಉಚ್ಚ ಅಧಿಕಾರಿಗಳಾದ ನಮ್ಮವರೂ ಅವರ ನವೀನತ್ವವನ್ನು ಅನುಭವಿಸಲು, ಅಥವಾ ಅಂಥ ಅಧಿಕಾರವನ್ನುಳ್ಳ ಯುರೋಪಿಯಾನರ ಸಮಾನಸ್ಕಂಧತೆಯನ್ನು ತಳೆಯಲು ಅಲ್ಲಿಗೆ ಹೋಗುವುದಿದೆ. ಬಯಲಿನಿಂದ ಬೆಟ್ಟಕ್ಕೇರುವರು. ಇತರ ಋತುಗಳಲ್ಲಿ ಅಲ್ಲಿಯ ಕಾಡುಗಳಿಂದ ಉದುರಿಬಿದ್ದ ತರಗೆಲೆಗಳನ್ನು ಒಟ್ಟಿ, ಮೇ ತಿಂಗಳ ಮಧ್ಯಭಾಗದಲ್ಲಿ ಅದೆಲ್ಲವನ್ನು ಸುಟ್ಟು, ೫೦ ಮೈಲು ದೂರದ ಜನರಿಗೂ ಅಲ್ಲಿಂದ ತಮ್ಮ ವೈಭವದ ಕ್ರಜ್ವಲತೆಯನ್ನು ಪ್ರದರ್ಶಿಸುವರು. ಇಂತೆಯೆ ಪ್ರತಿ ವರ್ಷವೂ ನಡೆವುದುಂಟು. ಒಂದು ಸಂವತ್ಸರದಲ್ಲಿ ಅಲ್ಲಿಗೆ ಹೋದ ಪರಿಶೆಯವರಿಂದ ಕೇಳಿದ ಕಥೆಯಿದು, ನೇತ್ರಾವತಿಯಂತೆ ಸುಳ್ಳಾದರೆ, ಬೆಟ್ಟದ ಮೇಲಿಂದ ಬಂದ ಸುಳ್ಳು, ಸಮುದ್ರದಲ್ಲೇ ಹರಿದು, ಕಥಾಸಾಗರದಲ್ಲಿ ಲೀನವಾಗಲಿ.

ಮುಂಜಾನೆ; ಇನ್ನೂ ಚಳಿ ಚೆನ್ನಾಗಿದೆ. ನಂಜುಂಡಯ್ಯನವರ ಮೈ ಮೊದಲೇ ಭಾರ; ಅದರ ಮೇಲೆ ಬಿದ್ದಿದೆ ಚಳಿಯ ಭಾರ; ಎಲ್ಲಕ್ಕೂ

ಮೇಲಾಗಿ, ಹೊದೆದುಕೊಂಡ ಲಾಲಿವ್ಲಿ ವಲ್ಲಿಗಭಾಳರ. ಮುನ್ಸಿಫ್ ಕೋರ್ಟಿನ ಹನ್ನೊಂದು ತಿಂಗಳ ಕಾರ್ಯಭಾರದ ಭರದಿಂದ ನವಚೇತನ ಸಂಗ್ರಹಕ್ಕಾಗಿ ಇಲ್ಲಿಗೆ ಬಂದುಳಿದಿದ್ದ ಅಯ್ಯರಿಗೆ, ಚಳಿಯನ್ನೊಡೆದು ಚೇತನ ಮೊಳೆಯಲು, ಸಮೀಪದ ದೇವಾಲಯದಿಂದ ಎಂಟು ಹೊಡೆವರೂ ಅವಕಾಶವಾಗಿಲ್ಲ. ಅಡಿಗೆಯಾಳು ಒಂದು ತಟ್ಟೆ ಕೊಕ್ಕೋವನ್ನು ತಂದಿಟ್ಟಿದು, ಮಂಚದ ಬಳಿಯಲ್ಲೆ; ಇನ್ನೂ ತಣ್ಣಗಾಗಿಲ್ಲ. ಅಷ್ಟರಲ್ಲೆ,– ಶನಿವಾರ,–ಬಾಗಿಲು ತಟ್ಟಿ, ತೆರೆಯುವವರಿರದೆ ಒಳಗೆ ನಡೆದುಬಂದರು. ಅಯ್ಯರು ಮುಸುಕಿನೊಳಗಿಂದಲೇ: "ಯಾರೋ?" ಉತ್ತರವಾಗಿ, "ನಾನು ಡಾಕ್ಟರ್ ರೋ. (ರೋ (Rowe) ಎಂಬುದಿದು ರಾವ್ ಎಂಬುದರ ಇಂಗ್ಲಿಷ್ ಸಂಸ್ಕರಣ) ಗುಡ್ ಮೊರ್ನಿಂಗ್, ಏನಿದು? ಇನ್ನೂ ಹೊದೆದುಕೊಳ್ಳುವುದೆ? ಅದರೊಳಗೆ ಚಳಿ ಪ್ರವೇಶಿಸಿಯೆ ಇದೆ. ಅದೇನೂ ಕುಂದೀತೆ?— ಹಾಸಿಗೆಬಿಟ್ಟು ಬನ್ನಿ, ನೋಡುವ. ಹವೆ ವ್ಯಾಯಾಮೇಲೆ ಆಡಲಿ ಅದೀಗ ಆರೋಗ್ಯ. ತಮ್ಮಂಥವರಿಗೇ ಹೀಗೆ ಸಾವಿರ ಸಲ ಹೇಳಿದ್ದಾಗಿದೆ. ಇಲ್ಲಿಗೆ ಬಂದು ಹೊಸಜೀವ ಲಭಿಸಿಕೊಳ್ಳಬೇಡವೆ ಮತ್ತೆ? ಮನೆಯಲ್ಲಿದ್ದಂತೆಯೆ ಇಲ್ಲಿಯೂ; ಬೆಟ್ಟ ಹತ್ತಿದರೂ ಹುಟ್ಟುಗುಣ . . . ಇರಲಿ. ಇದೇನು? ಕೊಕ್ಕೋ? ಕೊಕ್ಕೋ ಎಂಬ ಹೆಸರೇ ಕೋಳಿಕೂಗಿನದು. ಕೊಕ್ಕೋ ಎಂದರೇ, ಸ್ವಾಮಿ, ಬೆಳಗಾಯಿತು ಮತ್ತೆ. ಬಿಡಿ ಇದನ್ನು, ಬಿಸಾಡಿ. ನನಗಾಗಿಯೆ ರಾತ್ರಿಗೆ ಒಂದೂವರೆ ರೂಪಾಯಿ ಕ್ರಯದ ಚಾವನ್ನು ಮಮ್ಮಲ್ಲಿ ತಂದಿಟ್ಟಿರುವೆನು. ಕುಡಿಯಿರಿ ಅದನ್ನು, ಕುಡಿಯಿರಿ ಅದನ್ನು, ಕೊಕ್ಕೋ ವಿನ ಮಾಯೆ ಬೇಡ. ಐದು ರಾತ್ಲು ಒಮ್ಮೆಲೆ ತರಿಸಿದರೆ ಐದಾಣೆ ಲಾಭವೂ ಇದೆ. ನಾನೇ ಕಳುಹುವೆನು," ಎಂದು ನುಡಿದೇ ಮುಗಿಸಿದರು.

ಅಯ್ಯರು ಇಷ್ಟರಲ್ಲಿ ಎದ್ದು, ಅಲ್ಲಿದ್ದ ಪಾತ್ರೆಯಲ್ಲೆ ಮೊಗತೊಳೆದುಕೊಂಡು, ಡಾಕ್ಟರರನ್ನು ಕುಳ್ಳಿರಹೇಳಿ. ತಾವೂ ಒಂದು ಕುರ್ಚಿಯನ್ನಾರೋಹಿಸಿದರು. "ಡಾಕ್ಟರರೆ, ಇದು ಇಂಗ್ಲಿಷ್ ಕೊಕ್ಕೋ, ನಮ್ಮಲ್ಲಿಯ ಹಸುವಿನ ಅಚ್ಚ ಹಾಲೇ ಇದರಲ್ಲಿ ಬೆರಸಲಾಗಿದೆ. ತಾವಿಷ್ಟು ರುಚಿ ನೋಡಿರಿ." ಎಂದು ಅಯ್ಯರು ಹೇಳುವುದರೊಳಗೆ, ಡಾಕ್ಟರರು ಬೇಡವೆಂದರೂ ಎರಡು ತಟಕು ಮುಖಾಮೃತವು ತುಟಿಯಿಂದ ಹೊರಸೂಸಿತು.

"ನಾನು 'ಖಾಲಿ' ಹೊಟ್ಟೆಯಲ್ಲಿ ಎಂದೂ ಚಾ, ಕಾಫಿ, ಕೊಕ್ಕೋ ಒಂದನ್ನೂ ಒಲ್ಲೆನು. ನಾನು ತಮ್ಮಂಥವರಿಗೆ ಅದೆಷ್ಟೋ ಬಾರಿ ಹೀಗೆ ಹೇಳಿರುವೆನು," ಎನ್ನುತ್ತಲೇ, ಅಯ್ಯರ ಮಾತು 'ಖಾಲಿ'ಯಾಗದಂತೆ, 'ಖಾಲಿ' ಹೊಟ್ಟೆಯೊಳಗೆ ಒಂದು ತಟ್ಟೆ ಕೊಕ್ಕೋವನ್ನು ಡಾಕ್ಟರರು ಸುರಿದರು; ಅಯ್ಯರು ಆ ತಣ್ಣಗಾದ ಕೊಕ್ಕೋ ಕುಡಿಯದೆ; ಇದ್ದಷ್ಟೆ ಚಳಿಯನ್ನು ಅಪ್ಪಿಕೊಂಡರು.

ಡಾಕ್ಟರ್ ರೋರವರು, 'ಕುದುರೆಮುಖದ ಋತು' ಎಂಬಾ ಏಪ್ರಿಲ್ ಮೇ ತಿಂಗಳಲ್ಲಿ ಬಯಲಿಂದ ಬೆಟ್ಟ ಹತ್ತುವ ಸ್ಪೆಶಲ್ ಡಾಕ್ಟರರು. ಅತ್ತ ಸಂಚಾರವೂ ಆಯಿತು, ಸುಖವು ಆಯಿತು; ಹಲವು ದೊಡ್ಡ ಮನುಷ್ಯರ ಪರಿಚಯವೂ ಸುಲಭದಲ್ಲಾಗಿ, ಬೆಟ್ಟದಲ್ಲಿ ಬಿತ್ತಿದುದನ್ನು ಬಯಲಿನಲ್ಲಿ ಕೊಯ್ಯುವುದಕ್ಕೆ ಅನುಕೂಲವೂ ಆಗುತಿದ್ದಿತು. "ನಾಡೀಪರೀಕ್ಷೆಯೆ ಮುಖ್ಯ. ಈಗಣ ವೈದ್ಯರುಗಳಿಗೆ ನಾಡೀಪರೀಕ್ಷೆಯೇನೂ ತಿಳಿಯದು. ಅದಕ್ಕಾಗಿ ಪುನಃ ಸ್ಪೆಶಲ್ಲಾಗಿ ಕಲಿತು, ನಾನು ಮೆಡಲು ಪಡೆದಿದ್ದೆನು. ಇಲ್ಲಿಗೆ ವರ್ಷಂಪ್ರತಿ ಬರುವಂತೆ ಈ ವರ್ಷವೂ ಹೊರಡುವ ಅವಸರದಲ್ಲಿ, ಸಂಜೆಹೊತ್ತಿಗೆ ಬೆಳತಂಗಡಿಯ ಮೋಟರ್ ಆಳಿಗೆ ಅರ್ಧಾಣೆಯ ನಾಣ್ಯವೆಂದು ಮೆಡಲನ್ನೆ ಕೊಟ್ಟುಬಿಟ್ಟೆನು. ಕೇಳಿಹೋದರೆ,-ಡಾಕ್ಟರರಿಗೇ ಇಷ್ಟು ವಿಸ್ಮೃತಿ ಇದೆ, ಇವರ ಕೈಗೆ ರೋಗಿಗಳನ್ನೊಪ್ಪಿಸುವುದು ಹಿತವಲ್ಲವೆಂದು ಆಳಿನ ಮುಖಾಂತರ ಊರಲ್ಲೆಲ್ಲ ಸುದ್ದಿ ಹರಡಬಹುದೆಂದು ನಾನು ಕೇಳಿಲ್ಲ. ಇರಲಿ, ಅಂಥ ಸಾವಿರ ಮೆಡಲುಗಳು ಹೀಗೆ ನಾಡೀಪರೀಕ್ಷೆ ಮಾಡುವ ಇವೇ ಬೆರಳುಗಳ ಅಡಿಯಲ್ಲಿವೆ," ಎನ್ನುತ್ತ, ಅಯ್ಯರ ಬಲಗೈಯ ಮಣಿಗಂಟಿನ ಮೇಲೆ ಬೆರಳೊತ್ತಿ, ಡಾಕ್ಟರರು ನಾಡೀಪರೀಕ್ಷೆ ಮಾಡಿದರು.

"ತಮ್ಮ ನಾಡಿ ಕ್ರಮವಾಗಿಲ್ಲವಯ್ಯ, ನೇಟಿವ್ ವೈದ್ಯರು 'ವಾಯುಗ್ರಸ್ತ' ಎಂದಾರು. ಉತ್ತೇಜಕ ಪದಾರ್ಥವನ್ನೇನೂ ತಾವು ಪಡೆಯಲೇಬೇಕು. ನಾನು ಒಂದು ಮಿಕ್ಸ್ಚರನ್ನು (ಮಿಶ್ರಣ) ಕಳುಹುವೆನು. ಅದನ್ನು ಪ್ರತಿದಿನವೂ, ಚಳಿತೋರಿದಂತೆ ಎಷ್ಟು ಸಲ ಬೇಕೋ ಅಷ್ಟು ಸಲ ಕುಡಿಯಿರಿ. ಅದರ ಹಿಂದೆಯೇ ನಮ್ಮ ಚಾ ತಮಗೆ ಯುಕ್ತವೆಂದು ಕಂಡರೆ ನಗದು ಕ್ರಯ ಕೊಡಿರಿ ನಮ್ಮೂರವರಾದ ತಮಗೆ 'ವಿಝಿಟ್ ಫೀಸ್' ಇಲ್ಲ ಇಲ್ಲದಿದ್ದರೆ, ಮೊದಲನೇ ತಾರೀಕಿಗೆ ನೋಡೋಣ, ಏನವಸರ?" ಎಂದು ಚಿಕಿತ್ಸೆಗೆ ಕ್ರಮವಾಯಿತು.

ಅಯ್ಯರು ನಗಲಾರದೆ, ನಂಬಲಾರದೆ, ನಗುವನ್ನೂ, ವಿನೋದ ವನ್ನೂ ಅಡಗಿಸಲಾರದೆ, ಗೌರವಪಾಲನೆಗಾಗಿ ಕಾಲೋಚಿತವಾದ ರೀತಿ ಯಲ್ಲಿ, ಅರೆಕೆಮ್ಮಿದರು.

"ಹಾ! ಇದೇ ನೋಡಿದಿರಾ? ವಾಯುಗ್ರಸ್ತನಾಡಿ. ಕೆಮ್ಮೂ ಇದೆ. ಮೈಗೆ ಉಣ್ಣೆಯ ವಸ್ತ್ರದ ಒಳ ಅಂಗಿಗಳಿರಬೇಕು. ತಮ್ಮ ಎದೆಯ ಪ್ರಮಾ ಣಕ್ಕೆ ಸರಿಯಾದ ಅಂಗಿಗಳಿವೆ. ಅವನ್ನೂ ಕಳುಹುವೆನು. ಮಿಶ್ರಣದಲ್ಲಿ ಈ (ಕೆಮ್ಮಿನ) ಬಗ್ಗೆ ಔಷಧವನ್ನೂ ಬೆರಸಬೇಕಾಗಿದೆ. ಜರ್ಮನೀ ಮೂಲಿಕೆ ಗಳಿಗೆ ಬೆಲೆ ಮೊದಲೇ ಹೆಚ್ಚು; ಈಗ ಯುದ್ಧದ ನಂತರವಂತೂ ಆರುಮಡಿ! ಆದರೆ ಅಂಥ ಖಾತರಿ ರಾಮಬಾಣಗಳಲ್ಲದೆ ಮಿಕ್ಕವೆಲ್ಲ ಔಷಧಗಳೆ? ಮಿಶ್ರಣ ಕಳುಹುವೆನು ಚಾ, ಉಣ್ಣೆಯ ಒಳಅಂಗಿಗಳು—ಎಲ್ಲವನ್ನೂ ಕಳು ಹುವೆನು. ಯುಕ್ತವೆಂದು ಕಂಡರೆ ನಗದು ಕೊಡಿರಿ; ನಮ್ಮೂರವರಾದ ತಮಗೆ ವಿಸಿಟ್ ಫೀಸ್ ಇಲ್ಲ. ಇಲ್ಲದಿದ್ದರೆ ಮೊದಲನೇ ತಾರೀಕಿಗೆ ನೋಡೋಣ, ಏನವಸರ?" ಎಂದು ಡಾಕ್ಟರರು ಭರವಸೆ ಹೇಳಿ, ಅಲ್ಲಿಂದ ಹೊರಟರು. ಅಯ್ಯರು, ಟಪ್ಪಾಲು ಪತ್ರಗಳನ್ನೊಡೆದು ಓದತೊಡಗಿದರು.

ಒಂದು ತಿಂಗಳ ಕಾಲವೆಲ್ಲ ಹೀಗೆಯೇ ನಡೆಯಿತು. ಡಾಕ್ಟರರು ಬೆಳಗ್ಗೆ ಬಂದು ಅಯ್ಯರ ಕೊಕ್ಕೋ ಕುಡಿಯುವರು. ಹಿಂದಣದಿನದ ಮಿಶ್ರಣ ತಿದ್ದಿ ಬೇರೊಂದನ್ನು ಕಳುಹುವರು. ಇನ್ನು ಸಾಳಿನ ಮಧ್ಯಾ ಹ್ನಕ್ಕೆ ಅಯ್ಯರು ಬಯಲಿಗೆ ಇಳಿಯುವ ಮೋಟರುಹತ್ತುವುದೆಂದಾಯಿತು. ಇತರ ಹಲವು ಗೃಹಸ್ಥರೂ, ಡಾಕ್ಟರರೂ ಎರಡೂ ದಿನಗಳ ತರುವಾಯದಲ್ಲಿ ಕುದುರೆ ಮುಖದಿಂದಿಳಿಯುವರು.

ಅಯ್ಯರು ಹೊರಡುವಂದು ಬೆಳಿಗ್ಗೆ, 'ಮೈಲ್' ಪತ್ರಿಕೆಯಲ್ಲಿ—(ಉಚ್ಚ ಅಧಿಕಾರಿಗಳು ಇತರ ಪತ್ರಿಕೆಗಳನ್ನು ಓದುವವರಲ್ಲದೆ ತರಿಸಿಕೊಳ್ಳುವುದಿಲ್ಲ. ಮೈಲ್ ಪತ್ರಿಕೆಯನ್ನು ತರಿಸುವರು ಮಾತ್ರ)—ಅಯ್ಯರ ಹೆಸರಲ್ಲಿ ಅರ್ಧ ಲಕ್ಷ ರೂಪಾಯಿಗಳ ಅದೊಂದು ಕುದುರೆ ಜೂಜಿನ ಸೋಡ್ತಿ ಗೆದ್ದ ವಾರ್ತೆ ಯಿದೆ. ಡಾಕ್ಟರರು ಮೈಲನ್ನಲ್ಲದೆ ಉಳಿದ ಪತ್ರಿಕೆಗಳೆಲ್ಲ ಮೈಲಿಗೆ ಎನ್ನು ತ್ತಿದ್ದರು; ಅವರೂ ಮೈಲನ್ನೋದಲು ಅಯ್ಯರರಲ್ಲಿಗೇ ಬಂದು, ಕೊಕ್ಕೋ ಕುಡಿದು, ಈ ವಾರ್ತೆಯನ್ನೋದಿ, "ಸುಮ್ಮನೆ ಕಳವಳಗೊಳ್ಳಬೇಡಿರಿ.

ನಾಡಿಯು ಉದ್ರೇಕವಾದೀತು. ಅರ್ಧಲಕ್ಷ ರೂಪಾಯಿ! ಈಗಲೆ ಬಯಲು ಸೀಮೆಗೆ ಇಳಿದು, ಇಂದೇ ಷಷ್ಟಿಪೂರ್ತಿಯ ಉತ್ಸವ ಜರುಗಿಸಿ, ಉದ್ಯೋಗ ಭಾರವನ್ನು ಕೆಳಕ್ಕಿಳಿಸಿ, ಪೆನ್ಶನನ್ನೂ (ಇಳಿಯುಸಿರಲ್ಲಿ 'ಡಾಯಬೀಟಿಸ'ನ್ನೂ) ಪಡೆವ ಭಾಗ್ಯ ತಮ್ಮದು. ನಾಡಿಯ ಜೋಕೆ!" ಎಂದು, ಒಂದು ಚೂರು ಕಾಗದ ಎತ್ತಿಕೊಂಡು, ಬೇರೊಂದು ವಿಶ್ರಮಣದ ವಿಧಾನಕ್ರಮವನ್ನು ಬೇರೆ ಯಾರೂ ಓದಲಾರದ ಬರಹದಲ್ಲಿ ಗುರುತುಮಾಡಿಕೊಂಡರು.

ಅಷ್ಟರಲ್ಲಿ, ಅಶ್ವಮುಖಶ್ರೇಣಿಯ ಗ್ರೀಷ್ಮವಿಹಾರವಾಸಕ್ಕಾಗಿ ಬಂದಿದ್ದ ಮಹನೀಯರೆಲ್ಲರೂ ಒಬ್ಬೊಬ್ಬರಾಗಿ ಬಂದು, ಅಯ್ಯರನ್ನು ಅಭಿವಂದಿಸಿಯೋ, ಅಭಿನಂದಿಸಿಯೋ ಅಲ್ಲೇ ಸುಖಾಸನಗಳಲ್ಲಿ ವಿಶ್ರಮಿಸಿದ ಪ್ರಯುಕ್ತ, ಕೊನೆಯ ಮಿಶ್ರಣಕ್ಕೆ ಅವಕಾಶವುಂಟಾಗಲಿಲ್ಲ. ಅರ್ಧಲಕ್ಷ ರೂಪಾಯಿ ಬಹುಮಾನವನ್ನು ಅಯಾಚಿತವಾಗಿ ಪಡೆದ ಅಯ್ಯರು. ಅದನ್ನು ಗೆದ್ದುದನ್ನು ತಿಳಿದಾಗಲೆ, ಅವರ ಮನಸ್ಸಿನ ಅವಸ್ಥೆ, ಅಭಿಪ್ರಾಯ, ಉದ್ಗಾರ ಮೊದಲಾದುವನ್ನು ಸಂಗ್ರಹಿಸಿ, 'ಮೈಲ್' ಪತ್ರಿಕೆಗೂ ಬರೆದು ಕಳುಹುವ ಸಂಭ್ರಮವೂ ನಡೆಯಿತು.

ಅಯ್ಯರು ಆಗ, ಎಲ್ಲರನ್ನೂ ವಂದಿಸಿ, "ತಮ್ಮೆಲ್ಲರ ಸಹಾನುಭೂತಿ, ವಂದನೆಗಳಿಂದ ಧನ್ಯನಾದೆನು. ನಾನಿಂದೇ ಹೋಗತಕ್ಕವನು. ಉದ್ಯೋಗವನ್ನು ಉತ್ತರಾಧಿಕಾರಿಗೆ ವಹಿಸಿಕೊಟ್ಟು, ನನ್ನೂರಾದ ಹೊಸಪೇಟೆಗೆ ತೆರಳುವೆನು. ತಾವೆಲ್ಲರೂ ಇಲ್ಲೇ ಕೆಲದಿನ ಇರತಕ್ಕವರು. ನನ್ನ ಇಲ್ಲಿಗೆ ಬಿಡಾರದ ಸಾಮಗ್ರಿಗಳನ್ನೆಲ್ಲ ಏಕೆ ತಾನೆ ವೃಥಾ ಅಲ್ಲಿಗೆ ಒಯ್ಯಲಿ? ಈಗಂತೂ ದೊರೆತ ಸೋಡ್ತಿಯ ಹಣವಿದೆ. ಅವನ್ನೆಲ್ಲ ನನ್ನ ಮಿತ್ರರೊಳಗೆ ಹಂಚಿಕೊಟ್ಟು ಹೋಗುವೆನು. ಕೆಲವು ಧರ್ಮಸಂಸ್ಥೆಗಳಿಗೂ ಸಲ್ಲತಕ್ಕವಿವೆ. ಯಾವ್ಯಾವುದನ್ನು ಯಾರ್ಯಾರಿಗೆ ಕೊಡಬೇಕೆಂಬುವ ವ್ಯವಸ್ಥೆಯನ್ನು ಒಂದು ಪತ್ರದಲ್ಲಿ ಬರೆದು, ನಮ್ಮ ರೆವರೆಂಡ್ ರೆಕವ್‌ಸೇಯವರ ಕೈಯಲ್ಲಿಟ್ಟು, ನಾನು ತೆರಳುವೆನು; ಈ ಕಿಂಚಿದುಪಹಾರಗಳನ್ನು ನಾನಾಗಿ ಕೈಯೆತ್ತಿ ಕೊಡಲು ಸಂಕೋಚವೆನಿಸುತ್ತಿದೆ. ರೆವರೆಂಡರಂತೂ ಯಥಾರ್ಥ 'ಟ್ರಸ್ಟಿ'ಯರು," ಎಂದು, ಎಲ್ಲರನ್ನೂ ಪುನಃ ವಂದಿಸಿ ಕಳುಹಿಕೊಟ್ಟರು. ಅಯ್ಯರು ಅಂದೇ ಮಧ್ಯಾಹ್ನ ಬಯಲಿಗೆ ಇಳಿದು ಉದ್ಯೋಗ ನಿವೃತ್ತಿಯನ್ನು ಹೊಂದಿ, ಮಾರನೆದಿನ ಬೆಳಗ್ಗೆ ರೈಲುಬಂಡಿಯಲ್ಲಿ ಸ್ವಗೃಹಕ್ಕೆ ತೆರಳಿದರು.

ಆದರೆ, ಬೆಟ್ಟದ ಮೇಲೆ? ಅಯ್ಯರು ಹೊಸಪೇಟೆಗೆ ತಲಪಿದರೆಂಬ ವಾರ್ತೆಯು ಅಲ್ಲಿ 'ವ್ಹೈಲಿ'ನಲ್ಲೇ ತಲಪಿತು. ಅಂದು, ಅವರ ಬಿಡಾರದಲ್ಲಿ ರೆವರೆಂಡರು, ಸಮಸ್ತ ಮಿತ್ರಮಂಡಲಿಯನ್ನೂ ಕೂಡಿಸಿದರು. ಅಯ್ಯರ ದಾನಪತ್ರದಂತೆ, ಕಾಲೇಜಿಗೆ, ಹೈಸ್ಕೂಲಿಗೆ, ಬಾಲಿಕಾಪಾಠಶಾಲೆಗೆ, ಪತಿತಜನರಿಗೆ, ಮಹಿಳಾಮಂಡಲಿಗೆ, ಜಿಮ್ಖಾನಾ ಬೋರ್ಡಿಗೆ, ಬಾರ್ ಲೈಬ್ರೇರಿಗೆ, ಪುಸ್ತಕರಾಶಿಯನ್ನೂ, ಹಣದ 'ಚೆಕ್ಕು'ಗಳನ್ನೂ ಅರ್ಪಿಸಲಾಯಿತು. ಕ್ರಮವಾಗಿ ಒಂದೊಂದು ಹೆಸರನ್ನೋದುವಾಗ ಡಾ| ರೋರವರು ಕೊರಳು ಚಾಚುತ್ತಲಿದ್ದರು. ಅವರು ಆಗಾಗ ಉಪಹಾರಗಳನ್ನೂ ಕಾಣಿಕೆಗಳನ್ನೂ ಓದಿಹೇಳುತ್ತಿದ್ದಂತೆ ಉದ್ಗಾರಗಳನ್ನಾರಂಭಿಸಿ ಉಳಿದವರನ್ನು ತಲ್ಲಣಗೊಳಿಸಿದರು. ಕೊನೆಯದಾಗಿ ಅವರ ಹೆಸರೂ ಓದಿ ಹೇಳೋಣಾಯಿತು. ಅವರಿಗೆ ಒಂದು ದೊಡ್ಡ ಅಂದವಾದ ಪೆಟ್ಟಿಗೆ; ಬೀಗ ಮುದ್ರೆಯಿದೆ; ಅವರ ಹೆಸರುಚೀಟು ಅದಕ್ಕೆ ಅಂಟಿಸಲಾಗಿದೆ; ಡಾಕ್ಟರರು ಅದನ್ನು ಸ್ವಾಧೀನ ಪಡೆದುಕೊಂಡು ಎತ್ತಲಾರದೆ, ಅದರ ಮೇಲೆಯೆ ಮಂಡಿಸಿದರು. ಅಷ್ಟು ದೊಡ್ಡ ಉಪಹಾರವು ಮತ್ತಾರಿಗೂ ಯಾವ ಸಮಿತಿಗೂ ದೊರೆತಿರಲಿಲ್ಲ.

ರೆವರೆಂಡರನ್ನು ಕುರಿತು, "ನನ್ನ ಪೆಟ್ಟಿಗೆಯನ್ನೂ ಮಹಾಶಯರೆಲ್ಲರ ಇದಿರಲ್ಲೇ ಒಡೆದರಾಗದೆ? ನಮ್ಮ ಪರಮಮಿತ್ರರು, ನನ್ನ ಚಿಕಿತ್ಸೆಯಿಂದ ನವಚೇತನ ಪಡೆದು, ನನಗೆ ಚಿರಋಣಿಗಳಾದರು. ಅವರು ನನಗಿತ್ತುದನ್ನು ಎಲ್ಲರೂ ನೋಡಲಿ! ಅದರಿಂದೇನು?" ಎಂದು ಡಾಕ್ಟರರು ಸೂಚಿಸಿ, ಒತ್ತಾಯಪಡಿಸಿದರು.

ರೆವರೆಂಡರೂ ಪೆಟ್ಟಿಗೆಯ ಬಾಗಿಲನ್ನು ಒತ್ತಾಯದಿಂದ ಬೀಗಮುರಿದು ತೆರೆದರು. ಎಲ್ಲರೂ ಕುತೂಹಲಿಗಳಾಗಿ, ಕಣ್ಬಿಟ್ಟು ನಿಂತರು. ಡಾಕ್ಟರರು ಪೆಟ್ಟಗೆಯೊಳಗೆ ಇಣಿಕಿದ್ದೇ, ಚಕಿತರಾದರು.

ಪೆಟ್ಟಗೆಯಲ್ಲಿ—ಚಿಕ್ಕ ದೊಡ್ಡ, ಮಿಶ್ರಣಗಳನ್ನಿಡುವ ಸೀಸೆಗಳು: ಪ್ರತಿಯೊಂದರಲ್ಲಿಯೂ ಎಂಬಂತೆ ತುಂಬಾ ಔಷಧ; ಸೀಸೆ ತೆರೆದುದೇ ಇಲ್ಲ. ಒಂದು ಲಕ್ಕೋಟೆ, ಅದರಲ್ಲಿ ೨೫ ರೂಪಾಯಿ ಮೌಲ್ಯದ ಒಂದು ಚೆಕ್; ಅದರೊಡನಿಟ್ಟ ಪತ್ರದಲ್ಲಿ: "ವಿಝಿಟ್ ಫೀಸ್ ತೆಗೆದುಕೊಳ್ಳದೆ ಡಾಕ್ಟರ್ ರೋರವರು ನನಗೆ ಚಿಕಿತ್ಸೆನಡಿಸಿದರು. ನನ್ನ ಕೃತಜ್ಞತೆಯ ಸಾಮಾನ್ಯ ಉಪಹಾರವಾಗಿ ಮಿಶ್ರಣ ಕುಡಿಯದೆ, ವಿಝಿಟ್ ಫೀಸು ಕೊಡಲಾಗಿದೆ."

■■■■■■■■■

Edited, Printed & Published by K. V. Shenoy
at The Prabhat Printers Ltd., Mangalore.